ವೈ. ಹನುಮಂತರೆಡ್ಡಿ *

# ಕುರುಗೋಡು ನಾಡಿನ ಧಾರ್ಮಿಕ ಪರಿವರ್ತನೆ

ಕುರುಗೋಡು ಪಟ್ಟಣವು ಕ್ರಿ. ಶ. ೧೦–೧೨ನೇ ಶತಮಾನಗಳ ಕಾಲದಲ್ಲಿ "ಬಲಕುಂದೆ ೩೦೦ ನಾಡಿನ ರಾಜಧಾನಿ"ಯಾಗಿ ಮೆರೆದಿದೆ. ಈ ರಾಜ್ಯವನ್ನು ಕುರುಗೊಡು ಸಿಂಧ ವಂಶದ ರಾಚಮಲ್ಲ ಮತ್ತು ಆವನ ವಂಶದ ರಾಜರು ಆಳಿದ್ದಾರೆ. ಇವರು ವೀರಶೈವ ಧರ್ಮೀಯರಾಗಿದ್ದು, ಶೈವ ಧರ್ಮದ ಪೋಷಕರೂ ಆಗಿದ್ದರು.

ಕುರುಗೋಡು ಮತ್ತು ಸುತ್ತಲಿನ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಶೈವ ಧರ್ಮ ಪ್ರಧಾನವಾಗಿತ್ತೆಂದು ತೋರುತ್ತದೆ. ಪುರಾತನ ಕಾಲದಲ್ಲಿ ನಿರ್ಮಿಸಲ್ಪಟ್ಟಿರುವ ಹಲವಾರು ಶೈವ ದೇವಾಲಯಗಳು, ಮಂದಿರಗಳು, ಮೂರ್ತಿಗಳೂ ಈಗಲೂ ಇಲ್ಲಿ ಕಂಡು ಬರುತ್ತಿವೆ. ಇವುಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ೫ ವರ್ಗಗಳಾಗಿ ವಿಂಗಡಿಸಬಹುದು.

**೧ನೇ ವರ್ಗ :**

ಕಲ್ಲೇಶ್ವರ, ಹಿಂಡುಸಂಗಮೇಶ್ವರ, ಉಜ್ಜಾಳೇಶ್ವರ, ಘನಲಿಂಗೇಶ್ವರ, ನೀಲಕಂಠೇಶ್ವರ, ಗೌರೀಶ, ಮುದ್ದೇಶ, ಮಲ್ಲಿಕಾರ್ಜುನ (ತ್ರಿಕೂಟ ದೇವಸ್ಥಾನ), ತಳವಾರ ಈಶ್ವರ, ರಾಚಮಲ್ಲನ ಗುಡಿ, ಮೊದಲಾದವು.

**೨ನೇ ವರ್ಗ :**

ದೊಡ್ಡಬಸವೇಶ್ವರ ಗುಡಿ, ವಜ್ರಬಂಡೆ ಬಸಪ್ಪನ ಗುಡಿ ಮೊದಲಾದವು.

**೩ನೇ ವರ್ಗ :**

ಪಂಚಮುಖಿ ವೀರಭದ್ರನ ಗುಡಿ, ಗವಿವೀರಭದ್ರ ಮತ್ತು ಕೊಳದ ವೀರಭದ್ರ (ಇವು ೩ ಗುಹಾಂತರ ದೇವಾಲಯಗಳು.)

**೪ನೇ ವರ್ಗ :**

ಕೆಳಗಿನ ಪೇಟೆಯ ಬೃಹತ್ ಗಣೇಶನ ಮೂರ್ತಿ ಎತ್ತರ ಸುಮಾರು ೧೬ ಅಡಿ, ಹಳೇ ಗೋಡೆಯ ಗಣೇಶನ ಮೂರ್ತಿ ಎತ್ತರ ಸುಮಾರು ೬ ಅಡಿ ಮತ್ತು ಊರಿನ ಮಧ್ಯದ ಗಣೇಶನ ಮೂರ್ತಿಗಳು ಎತ್ತರ ಸುಮಾರು ೩ ಅಡಿ.

**೫ನೇ ವರ್ಗ :**

ಸುಂಕಲಮ್ಮನ ಗುಡಿ ಮತ್ತು ಕಾಳಮ್ಮನ ಗುಡಿ ಮೊದಲಾದವು ಮೇಲೆ ತಿಳಿಸಿದ ದೇವಸ್ಥಾನಗಳಲ್ಲಿ ೧ನೇ ವರ್ಗದಲ್ಲಿರುವ ಎಲ್ಲಾ ಗುಡಿಗಳು ಶಿವಲಿಂಗವಿರುವ ಶಿವಾಲಯಗಳು. ೨ನೇ ವರ್ಗದಲ್ಲಿರುವವು ಬೇರೆ ಬೇರೆ ಗಾತ್ರದ ಬಸವಣ್ಣನ ಮೂರ್ತಿ ಇರುವ ಗುಡಿಗಳು. ೩ನೇ ವರ್ಗದವು ಬೇರೆ ಬೇರೆ ಆಕಾರದ ಗಾತ್ರದ ವೀರಭದ್ರನ ಗುಡಿಗಳು. ೪ನೇ ವರ್ಗದವು ಬೇರೆ ಬೇರೆ ಅಳತೆ ಪ್ರಮಾಣದ ಗಣೇಶನ ಮೂರ್ತಿಗಳು ಹಾಗೂ ಗುಡಿಗಳು. ೫ನೇ ವರ್ಗದವು ಶೈವ ಚಿಹ್ನೆಯುಳ್ಳ ಆಯುಧಗಳನ್ನು ಹಿಡಿದು, ಕುಳಿತ ಭಂಗಿಯಲ್ಲಿರುವ ಪಾರ್ವತಿಯ ಗುಡಿಗಳು.

---

* ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ತೆಕ್ಕಲಕೋಟೆ, ಬಳ್ಳಾರಿ ತಾಲ್ಲೂಕು

ಮೇಲಿನ ದೇವಾಲಯಗಳನ್ನು ಪರಿಶೀಲಿಸಿದಾಗ ಶಿವ, ಆತನ ಸತಿ ಪಾರ್ವತಿ, ಮಕ್ಕಳಾದ ಗಣೇಶ ಮತ್ತು ವೀರಭದ್ರ ಅಲ್ಲದೆ ಆತನ ವಾಹನನಾದ ನಂದಿ ಅಥವಾ ಬಸವಣ್ಣನಿಗೆ ಸಂಬಂಧಿಸಿದವುಗಳು. ಮೇಲಿನ ದೇವಾಲಯಗಳಲ್ಲಿ ಹಲವು ಉತ್ತಮ ಸ್ಥಿತಿಯಲ್ಲಿದ್ದು ಪೂಜೆ ಪುನಸ್ಕಾರಗಳು ನಿರಂತರವಾಗಿ ಜರುಗುತ್ತಾ ಇವೆ. ಈ ದೃಷ್ಟಿಯಿಂದ ಕುರುಗೋಡು ಮೊದಲಿನಿಂದಲೂ 'ಶೈವ ಮತ' ಪ್ರಧಾನ ಕ್ಷೇತ್ರವಾಗಿದೆ ಎಂದು ತಿಳಿದುಬರುತ್ತದೆ.

ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೇಲೆ ೧ನೇ ವರ್ಗದಲ್ಲಿರುವ ಶಿವಾಲಯಗಳಲ್ಲಿ **'ಘನಲಿಂಗೇಶ್ವರ'** ಎಂದು ಕರೆಯಲ್ಪಡುತ್ತಿರುವ ದೇವಾಲಯ ಹಿಂದೆ ಒಂದು **'ಜೈನ ಬಸದಿ'**ಯಾಗಿತ್ತೆಂದು ತಿಳಿದುಬಂದಿದೆ. ಈ ದೇವಾಲಯದ ವಾಸ್ತುಶಿಲ್ಪ ಮತ್ತಿತರ ವಿಷಯಗಳನ್ನು ಪರಿಶೀಲಿಸಿದಾಗ ಇದು ಇತರ ದೇವಾಲಯಗಳಂತೆ ಇರದೆ ವಿಭಿನ್ನ ರೀತಿಯಲ್ಲಿದೆ. ಇದು ದಕ್ಷಿಣ ದಿಕ್ಕಿಗೆ ಮುಖವಾಗಿದ್ದು ಏಳುವರೆ × ಏಳುವರೆ ಅಡಿ ಚೌಕದ ಮುಖಮಂಟಪ, ೨೫ × ೨೫ ಅಡಿ ಚದರದ ೩ ಅಂಕಣದ ಸಭಾ ಮಂಟಪ, ಏಳುವರೆ ಅಡಿ ಚದರದ ಸುಕನಾಸಿ ಮತ್ತು ಹನ್ನೊಂದುವರೆ × ಒಂಭತ್ತುವರೆ ಅಡಿ ಅಳತೆಯ ಗರ್ಭಗೃಹಗಳನ್ನು ಹೊಂದಿದೆ. ಇದರ ದ್ವಾರಗಳ ದ್ವಾರಬಂಧದ ಇಕ್ಕೆಡೆಗಳಲ್ಲಿ ಪೂರ್ಣಕುಂಭದ ಚಿಹ್ನೆಗಳಿದ್ದು, ದ್ವಾರಬಂಧದ ಮೇಲೆ ಲಲಾಟ ಬಿಂಬದಲ್ಲಿ ಸಾಮಾನ್ಯವಾಗಿ ಗಜಲಕ್ಷ್ಮಿ ಇರುವ ಸ್ಥಳದಲ್ಲಿ ಮುಕ್ಕೊಡೆಯ ಕೆಳಗಡೆ ಕುಳಿತ ಭಂಗಿಯ ಜಿನಮೂರ್ತಿ ಇದ್ದು, ತದನಂತರದಲ್ಲಿ ಆ ಚಿಹ್ನೆಯನ್ನು ಅಳಿಸಿ ಲಿಂಗದ ಆಕೃತಿಯನ್ನು ರಚಿಸಲಾಗಿದೆ. ಇದೇ ರೀತಿಯ ಚಿಹ್ನೆಗಳು ಶುಕನಾಶಿಯ ದ್ವಾರಬಂಧಗಳಲ್ಲಿಯೂ ಇವೆ. ಗರ್ಭಗೃಹದಲ್ಲಿ ಆಯಾತಾಕಾರ ಐದೂವರೆ × ಎರಡು × ಎರಡು ಅಡಿ ಅಳತೆಯ ಪೀಠವಿದ್ದು ; ಅದರ ಮುಂಭಾಗದ ಮಧ್ಯದಲ್ಲಿ ನಿಂತ ಭಂಗಿಯಲ್ಲಿರುವ ಒಂದು ಸಿಂಹ ಮತ್ತು ಅದರ ಎಡ-ಬಲಗಳಲ್ಲಿಯೂ ವಿರುದ್ಧ ದಿಕ್ಕಿಗೆ ಮುಖಮಾಡಿ ನಿಂತಿರುವ ಎರಡು ಸಿಂಹಗಳ ಶಿಲ್ಪಗಳಿದ್ದು, ಇದೊಂದು ಸಿಂಹಪೀಠವಾಗಿದೆ.

ಈ ಪೀಠದ ಮೇಲೆ ಮೊದಲಿದ್ದ ಜಿನಮೂರ್ತಿಯನ್ನು ತೆಗೆದು ಆ ಸ್ಥಾನದಲ್ಲಿ ಅನಂತರದಲ್ಲಿ 'ಶಿವಲಿಂಗ' ಸ್ಥಾಪನೆ ಮಾಡಲಾಗಿದೆ. ಶಿವಲಿಂಗಕ್ಕೆ ಸಾಮಾನ್ಯವಾಗಿ ದುಂಡಗಿನ ಇಲ್ಲವೆ ಚೌಕಾಕಾರದ ಪಾಣಿಪೀಠ (ಪಾಣಿಪಟ್ಟ, ಪಾಣಿವಟ್ಟ) ಇರುತ್ತದೆ. ಆದ್ದರಿಂದ ಇದು ಶಿವಲಿಂಗಕ್ಕಾಗಿ ನಿರ್ಮಿಸಿದ ಪಾಣಿಪೀಠವಲ್ಲವೆಂದು ದೃಢಪಡುತ್ತದೆ.

ಈ ದೇವಸ್ಥಾನದ ಮಹಾದ್ವಾರದ ಪಕ್ಕದ, ಎಡಭಾಗದ ಗೋಡೆಯ ಮೇಲೆ ಶಕವರ್ಷ ೧೪೬೭ (ಕ್ರಿ.ಶ. ೧೫೪೫)ನೆಯ ವಿಶ್ವಾವಸು ಸಂವತ್ಸರದ ೧೩ ಸಾಲಿನ ಶಾಸನವಿದ್ದು, ಅದರಲ್ಲಿ ಶ್ರೀಮನ್ ಮಹಾದೇವ ದೇವೋತ್ತಮ ಕುರುಗೋಡು ಬಸ್ತಿಯ ಜಿನದೇವರಿಗೆ ಧರ್ಮ ಮಹಾ ರಾಜಾಧಿರಾಜ ಪರಮೇಶ್ವರ ಶ್ರೀವೀರ ಪ್ರತಾಪ ಶ್ರೀ ವೀರಸದಾಶಿವ ಮಹಾರಾಯರು ಪೃಥ್ವೀ ರಾಜ್ಯಂ ಗೈಯ್ಯುತ್ತಿರುಲು ಶ್ರೀಮನ್ ಮಹಾ ಮಂಡಳೇಶ್ವರ ಕೊಟಗಾರ ರಾಮರಾಜ ಒಡೆಯರ ಮೊಮ್ಮಕ್ಕಳು ಅಳಿಯ ಲಿಂಗರಾಜದೇವ ಮಹಾ ಅರಸುಗಳ ಅಣ್ಣಂದಿರು ರಾಮರಾಜಯ್ಯಗಳು ತಮ್ಮ ತಂದೆ ಮಲ್ಲರಾಜ ಒಡೆಯರಿಗೆ ಪುಣ್ಯವಾಗಬೇಕೆಂದು ಅಮೃತಪಡಿ ನೈವೇದ್ಯಕ್ಕೆ ಭೂಮಿ ದತ್ತಿಬಿಟ್ಟಿರುವ ಬಗ್ಗೆಯು ತಿಳಿದುಬರುತ್ತದೆ. ಅಲ್ಲದೆ ಶ್ರೀ ಗೋಮಿಸೆಟ್ಟಿ ಎಂಬುವವನು ಈ ಬಸದಿಯನ್ನು ದುರಸ್ತಿಗೊಳಿಸಿದ ಬಗ್ಗೆಯೂ ತಿಳಿದುಬರುತ್ತಿದೆ. ಮೇಲಿನ ಎಲ್ಲಾ ಅಂಶಗಳಿಂದ ನಿಸ್ಸಂಶಯವಾಗಿ ಇದು ಒಂದು 'ಜೈನ ಬಸದಿ' ಎಂದು ದೃಢಪಡುತ್ತದೆ.

ಈ ಜೈನ ಬಸದಿಯಿಂದ ಪೂರ್ವ ದಿಕ್ಕಿಗೆ ಸು. ೨೫೦ಮೀ. ದೂರದಲ್ಲಿ ಇನ್ನೊಂದು ಜೈನ ಬಸದಿ ಇದ್ದು, ಅದು ಈ ಮೊದಲೇ ಪೂರ್ಣ ಹಾಳಾಗಿದೆ. ನೆಲಮಟ್ಟದಲ್ಲಿ ಅದರ ನೆಲಗಟ್ಟು ಮಾತ್ರ ಈಗ ಕಾಣಬರುತ್ತದೆ. ಈ ಸ್ಥಳದಲ್ಲಿ (ನೆಲಗಟ್ಟಿನ ಮೇಲೆ) ನಿಂತ ಭಂಗಿಯಲ್ಲಿರುವ ಸುಮಾರು ೪ ಅಡಿ ಎತ್ತರದ ಬಿಳಿ ಶಿಲೆಯಲ್ಲಿ ನಿರ್ಮಿಸಿರುವ ತೀರ್ಥಂಕರಮೂರ್ತಿ ಬಯಲಿನಲ್ಲಿ ನಿಂತಿದೆ. ಕೆಲವೇ ದಿನಗಳಲ್ಲಿ ಇದು ಕೂಡ ಕಣ್ಮರೆಯಾಗಬಹುದು.

1 ಶಾಸನ SII-IX-ii-618 ಕುರುಗೋಡು ಬಳ್ಳಾರಿ ತಾಲ್ಲೂಕು

ಹೀಗೆ ಮೇಲಿನ ವಿಷಯದ ಪರಿಶೀಲನೆಯಿಂದ ಶೈವ ಮತ ಪ್ರಧಾನವಾದ ಈ ಪ್ರದೇಶದಲ್ಲಿ ಜೈನ ಧರ್ಮವೂ ಮೊದಲು ಅಸ್ತಿತ್ವದಲ್ಲಿದ್ದ ಬಗ್ಗೆ ತಿಳಿದುಬರುತ್ತಿದೆ. ಆದರೆ ಈಗ ಕುರುಗೋಡಿನ ಸುತ್ತಲಿನ ಪ್ರದೇಶದಲ್ಲಿ ಜೈನ ಧರ್ಮದ ಒಂದು ಕುಟುಂಬವೂ ಕಂಡುಬರುತ್ತಿಲ್ಲ. ಹಾಗಾದರೆ ಇಲ್ಲಿದ್ದ ಜೈನಧರ್ಮೀಯರು ಏನಾದರು ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಬಗ್ಗೆ ಸರಿಯಾದ ಪ್ರಾವೆ ದೊರೆಯುತ್ತಿಲ್ಲ. ಹಾಗಾದರೆ ಇಲ್ಲಿದ್ದ ಜೈನರು ಇಲ್ಲಿಂದ ಬೇರೆ ಕಡೆಗೆ ವಲಸೆ ಹೋದರೇ? ಎಂಬ ಪ್ರಶ್ನೆಯೂ ಬರುತ್ತದೆ. ಇತರ ಜನಾಂಗದವರೆಲ್ಲರೂ (ಇತರ ಧರ್ಮೀಯರು) ಆ ಕಾಲದಿಂದ ಇಂದಿನ ವರೆಗೆ ನಿರಂತರವಾಗಿ ಯಾವುದೇ ತೊಂದರೆಯಿಲ್ಲದೆ ಈ ಸ್ಥಳದಲ್ಲಿಯೇ (ಊರಿನಲ್ಲಿಯೇ) ವಾಸವಾಗಿರಲು, ಜೈನರು ಮಾತ್ರ ಬೇರೆ ಕಡೆಗೆ ವಲಸೆ ಹೋಗಲು ಕಾರಣವೇನು ? ಆದ್ದರಿಂದ ಅವರು ಬೇರೆಡೆಗೆ ವಲಸೆ ಹೋಗಿರುವ ಸಾಧ್ಯತೆ ಕಂಡುಬರುತ್ತಿಲ್ಲ. ಹಾಗಾದರೆ ಈ ಕೆಳಗಿನ ಇತರ ಕಾರಣಗಳನ್ನು ಪರಿಶೀಲಿಸೋಣ.

೧. ಬಹುಶಃ ಜೈನ್ಯಧರ್ಮ ಪ್ರಾಬಲ್ಯ ಕಳೆದುಕೊಳ್ಳುತ್ತಿದ್ದರಿಂದಲೂ,

೨. ಅವರ ಕಟ್ಟುನಿಟ್ಟಾದ ಆಚರಣೆ ವಿಧಿವಿಧಾನಗಳಿಂದ ದಣಿದುದರಿಂದಲೋ

೩. ಈ ಪ್ರದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದ ವೀರಶೈವ-ಅರಸರ ಪ್ರೋತ್ಸಾಹದಿಂದಲೋ ಅಥವಾ ಪರಿಸ್ಥಿತಿ ಒತ್ತಡದಿಂದಲೋ ಮೊದಲು ಜಿನ ಧರ್ಮಿಯನಾಗಿದ್ದ ಬಿಟ್ಟಿದೇವ, ಶ್ರೀರಾಮನುಜಾಚಾರ್ಯರ ಪ್ರಭಾವಕ್ಕೊಳಗಾಗಿ ವೈಷ್ಣವ ಧರ್ಮವನ್ನುಸ್ವೀಕರಿಸಿ' ವಿಷ್ಣುವರ್ಧನ' ನಾದಂತೆ ಇಲ್ಲಿದ್ದ ಜೈನರು, ವೀರಶೈವ ಮತವನ್ನು ಸ್ವೀಕರಿಸಿರಬಹುದೆಂದು ತೋರುತ್ತದೆ.

2 ಕುರುಗೋಡು ಕೈಫಿಯತು (ಮೆಕೆಂಜಿ ಸಂಗ್ರಹ)